ಶ್ರೀಮತೇ ರಾಮಾನುಜಾಯ ನಮಃ

# ಶ್ರೀ ರಾಮಾನುಜ ದರ್ಶನ ಸಮ್ಮೇಳನ

## " ಎಂಬೆರುಮಾನಾರ್ ದರ್ಶನ ಮಹಾನಾಡು "



ಶ್ರೀ ಯದುಗಿರಿ ಯತಿರಾಜರ್ "ಪುನರ್ವಸು ಉತ್ಸವ" ಸೇವಾ

ಯತೀಂದ್ರವಿಜಯಸ್ಥಾನೇ ಯದುಶೈಲೇ ರಮಾಪತಿಃ |
ಶ್ರಿಯಾ ಚ ಲಕ್ಷ್ಮಣಾರ್ಯೇಣ ಜುಷ್ಟೋ ಜೀಯಾತ್ ಸಮಾಃ ಶತಂ ||

" **ಸರ್ವಶ್ರುತಿ ಸಾಮರಸ್ಯ** " ವನ್ನು ನವರತ್ನಗಳಂತಿರುವ ತಮ್ಮ ಗ್ರಂಥಗಳಲ್ಲಿ ಪ್ರತಿಪಾದಿಸಿ **ಶ್ರೀ ಪಾಂಚರಾತ್ರ** ದಿವ್ಯಶಾಸ್ತ್ರದ ಹೃದಯವಾದ **ಶರಣಾಗತಿ** (ಪ್ರಪತ್ತಿ) ಧರ್ಮವನ್ನು ಸ್ವಯಂ ಅನುಷ್ಠಾನ ಮಾಡಿಯೂ ಶಿಷ್ಯ ಪರಂಪರೆಯ ಮೂಲಕ ಪ್ರಚಾರ ಮಾಡಿಯೂ ಸಕಲ ಚೇತನೋಜ್ಜೀವನ ತತ್ಪರರಾಗಿ **ಕೃಪಾಮಾತ್ರಪ್ರಸನ್ನಾಚಾರ್ಯ** ರೆಂದು ಪ್ರಸಿದ್ಧರಾಗಿರುವ ಭಗವದ್ರಾಮಾನುಜಾಚಾರ್ಯರು **ಗೋಮಂತಗಿರಿ, ದಕ್ಷಿಣ ಬದರಿಕಾಶ್ರಮಂ, ಶ್ರೀ ಯಾದವಾದ್ರಿ, ತಿರುನಾರಾಯಣಪುರಂ** ಎಂದು ಪ್ರಸಿದ್ಧವಾಗಿರುವ **ಮೇಲುಕೋಟೆ** ಕ್ಷೇತ್ರದಲ್ಲಿ ಬಹಳಕಾಲ ನೆಲಸಿ ಶ್ರೀವೈಷ್ಣವ ಸಿದ್ಧಾಂತ ಪ್ರಚಾರವನ್ನು ಮಾಡಿದರು. ಅಷ್ಟೋತ್ತರ ಶತಸ್ಥಾನ ಸಾರವಾದ ಈ ವೈಕುಂಠವರ್ಧನ ಕ್ಷೇತ್ರದಲ್ಲಿ ನೆಲೆಸಿರುವ **ತಿರುನಾರಾಯಣಸ್ವಾಮಿಯವರನ್ನು** ನಮಗೆಲ್ಲ ತೋರಿಸಿ ಉಪಕರಿಸಿದ ಶ್ರೀ ರಾಮಾನುಜ ಮುನಿವರ್ಯರು ಆ ಮೂರ್ತಿಯನ್ನು ಅತ್ಯಾದರದಿಂದ ತಮ್ಮ ಕೈಯಾರ ಪೂಜಿಸಿ **ಶ್ರೀಮನ್ ಶ್ರೀರಂಗಶ್ರಿಯಂ ಅನುಪದ್ರವಾಂ ಅನುದಿನಂ ಸಂವರ್ಧಯ** ಎಂದು ಪ್ರಾರ್ಥಿಸಿದರು. ಅದರ ಫಲವಾಗಿಯೇ ಶ್ರೀರಂಗದ ಸರ್ವ ಸಮೃದ್ಧಿಯೂ ಮತ್ತೆ ಉಂಟಾಯಿತು. ಇದನ್ನು ಎಲ್ಲರಿಗೂ ತಿಳಿಸುವುದಕ್ಕಾಗಿಯೇ ಈ ಆಚಾರ್ಯಸಾರ್ವಭೌಮರು ಪರಮಪದಕ್ಕೆ ತೆರಳುವಮುನ್ನ ತಮ್ಮ ಶಿಷ್ಯರಿಗೆ ಆರು ಸಂದೇಶಗಳನ್ನಿತ್ತರು. ಅವುಗಳಲ್ಲಿ ನಾಲ್ಕನೆಯದು: "ಯದುಶೈಲದಲ್ಲಿ ಒಂದು ಗುಡಿಸಲನ್ನು ಕಟ್ಟಿಕೊಂಡು ಅಲ್ಲಿ ನಿತ್ಯವಾಸ ಮಾಡುವುದು " " ಯದುಶೈಲದಲ್ಲಿ ನಿತ್ಯವಾಸ ಮಾಡುವವರು ಸತ್ಪುರುಷರೆಂದು ಶ್ರೀಮಣವಾಳ ಮಹಾಮುನಿಗಳು ಕೊಂಡಾಡಿ ತಮ್ಮ ಪರವಾಗಿ ತೋಳಪ್ಪರ್ ಎಂಬ ತಮ್ಮ ಅಂತರಂಗ ಶಿಷ್ಯರನ್ನು ಯದುಗಿರಿಗೆ ಭಗವದಾಚಾರ್ಯಕೈಂಕರ್ಯಪರರಾಗಿ ನೆಲಸುವಂತೆ ಕಳುಹಿಸಿ ಕೊಟ್ಟರು. ಈ " ವಿಶದವಾಕ್ ಶಿಖಾಮಣಿ " ಗೆ " ಆಚಾರ್ಯ ಹೃದಯ " ದ ಸಕಲ ರಹಸ್ಯಾರ್ಥಗಳನ್ನೂ ವಿವರಿಸಿದ ಭಾಗ್ಯ ಮೇಲುಕೋಟೆಯ " ಜನನ್ಯಾಚಾರ್ಯ " ರೆಂಬ ಶ್ರೀಶಾನುದಾಸಗುರುಗಳದು.

ಸತ್ಸಂಪ್ರದಾಯನಿಷ್ಠರಿಗೆ ಪ್ರಿಯವಾದ " ತಿರುಪ್ಪಾವೈ " ಶ್ರೀವಚನ ಭೂಷಣ ಮತ್ತು ಆಚಾರ್ಯ ಹೃದಯವೆಂಬ ಗ್ರಂಥಗಳಿಗೆ ವ್ಯಾಖ್ಯಾನವನ್ನು ರಚಿಸಿರುವ ತಿರುನಾರಾಯಣಪುರತ್ತಾಯ್ (ಆಯಿದೇವರಾಜ) ಎಂಬ ಈ ಆಚಾರ್ಯರು ಭಗವದ್ವಿಷಯ ಕಾಲಕ್ಷೇಪಗೋಷ್ಠಿಯನ್ನು ಬಹುಕಾಲ ನಿರ್ವಹಿಸಿದರು. ಶ್ರೀಭಾಷ್ಯ–ಭಗವದ್ವಿಷಯಾಧಿಕಾರಿಗಳಿಂದ ಶೋಭಿಸುವ ಮೇಲುಕೋಟೆ ಜ್ಞಾನಮಂಟಪವೆಂದು ಪ್ರಸಿದ್ಧವಾಗಿದೆ. ಶ್ರೀ ವೇದಾಂತಾಚಾರ್ಯರು ಯದುಗಿರಿಯನ್ನು ಯತಿರಾಜರ " ವಿಜಯ ಸ್ಥಾನ " ವೆಂದು ಹಾಡಿದ್ದಾರೆ. ಇಂತಹ ವೈಭವವುಳ್ಳ ಮೇಲುಕೋಟೆಯಲ್ಲಿ ಈ ಸಾಧಾರಣ ವರ್ಷದ ವೈಶಾಖಮಾಸದಲ್ಲಿ ಶ್ರೀ ಯತಿರಾಜ ಸಂಪತ್ಕುಮಾರನ ಪಲ್ಲವೋತ್ಸವಕ್ಕೆ ಮೊದಲು ಮೇ 24 ಭಾನುವಾರದಿಂದ ಆರಂಭವಾಗಿ ಮೂರು ದಿನ **ಶ್ರೀರಾಮಾನುಜ ದರ್ಶನ ಮಹಾ ಸಮ್ಮೇಳನ** (ಅಖಿಲ ಭಾರತ ರಾಮಾನುಜೀಯರ ಮಹಾ ಸಭೆ) ಸೇರುತ್ತದೆ. ಶ್ರೀ ರಾಮಾನುಜಾಚಾರ್ಯರ ಸಂದೇಶ/ಉಪದೇಶಗಳನ್ನು ಮನನ ಮಾಡಿ ಎಲ್ಲರೂ ಉಜ್ಜೀವಿಸಬೇಕು. ಆಚಾರ್ಯರ ಉಪದೇಶವನ್ನು ಭಾಷಣ ವಾಚನ ಉಪನ್ಯಾಸಾದಿಗಳ ಮೂಲಕ ಅನುಭವಿಸಿ ಪುನೀತರಾಗಿ ಎಲ್ಲರೂ ಧನ್ಯರಾಗಬಹುದು. ಶ್ರೀರಂಗನಾಥನೂ ಗೋಷ್ಠೀಪೂರ್ಣರೂ " ಉಡೈಯವರ್ " " ಎಂಬೆರುಮಾನಾರ್ " ಎಂದು ಕರೆದು ಆದರಿಸಿದ ಶ್ರೀ ರಾಮಾನುಜಾಚಾರ್ಯರ ಶ್ರೀಪಾದ ಸಂಬಂಧವುಳ್ಳ ಸಮಸ್ತ ಮಹಾ ಜನರೂ ಈ ಸಮ್ಮೇಳನಕ್ಕೆ ದಯಮಾಡಿಸಿ ಇದರ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಧನ್ಯರಾಗಬೇಕಾಗಿ ಪ್ರಾರ್ಥನೆ. ಅಭೂತ ಪೂರ್ವವಾದ ಈ ಮಹೋತ್ಸವ ಯಶಸ್ವಿಯಾಗಿ ನಡೆಯುವಂತೆ ಎಲ್ಲ ಆಸ್ತಿಕ ಮಹನೀಯರೂ ಸ್ವಹಸ್ತ-ಪರಹಸ್ತಗಳಿಂದ ಉದಾರಸಹಾಯ ಮಾಡಿ ಸಹಕಾರ ಸಂಪತ್ತನ್ನು ನೀಡಿ ಈ ದಿವ್ಯದೇಶವನ್ನಲಂಕರಿಸಿ ಭಗವದ್ರಾಮಾನುಜಾಚಾರ್ಯರ ಮತ್ತು ಶ್ರೀಯದುಗಿರಿಶೆಲ್ವತಿರುನಾರಾಯಣ ಸ್ವಾಮಿಯವರ ಅನುಗ್ರಹಕ್ಕೆ ಪಾತ್ರರಾಗಬೇಕಾಗಿ ಪ್ರಾರ್ಥಿಸುತ್ತೇವೆ.

ಕಾರ್ಯದರ್ಶಿ, ಮೈಸೂರು ಶಾಖೆ,
ಬೆಂಗಳೂರು–3. 27–4–70.

ಕಾರ್ಯದರ್ಶಿ,
**ರಾಮಾನುಜ ಮಿಶನ್** (ಇಂಡಿಯಾ)
ಪಾಳೈಯಂಕೋಟ್ಟೈ, ತಿರುನೆಲ್ವೇಲಿ.

# ಶ್ರೀ ರಾಮಾನುಜ ದರ್ಶನ ಮಹಾ ಸಮ್ಮೇಳನ

## ಸ್ವಾಗತ ಸಮಿತಿ

ಅಧ್ಯಕ್ಷರು : ಶ್ರೀ ಎಸ್.ಕೆ. ವೆಂಕಟರಂಗಯ್ಯಂಗಾರ್,
ಬಿ.ಎ. ಬಿ.ಎಲ್. ಅಡ್ವೋಕೇಟ್, ಬೆಂಗಳೂರು.

ಕಾರ್ಯದರ್ಶಿಗಳು : ವಿದ್ಯಾಭೂಷಣ ಶ್ರೀ ಆ. ನ. ಶ್ರೀನಿವಾಸೈಯಂಗಾರ್,
ಬಿ.ಎಸ್.ಸಿ. (ಆನರ್ಸ್)

ಸಂಪಾದಕರು : ಶ್ರೀವಾಸುದಾಸಗ್ರಂಥಮಾಲಾ, ಬೆಂಗಳೂರು-3

ಮತ್ತು

ವಿದ್ವಾನ್ ಶಿರೋಮಣಿ ಶ್ರೀ. ಪ್ರ. ಭ. ಶ್ರೀನಿವಾಸಾಚಾರ್ಯರು,
(ಕೇಂದ್ರಸಂಸ್ಥೆಯ ಗೌ|| ಕಾರ್ಯದರ್ಶಿ, ಪಾಳೈಯಂಕೋಟ್ಟೈ, ತಿರುನೆಲ್ವೇಲಿ)

ಕೋಶಾಧಿಕಾರಿಗಳು : ಶ್ರೀ ಕಡಾಂಬಿ ಶ್ರೀನಿವಾಸೈಯ್ಯಂಗಾರ್ಯರು,
73, ಆರನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು-3

## ಸ ದ ಸ್ಯ ರು

ಶ್ರೀರಾಮಾನುಜ ಮಿಷನ್ (ಇಂಡಿಯಾ) ಕೇಂದ್ರ ಸಂಸ್ಥಾಧಿಕಾರಿಗಳು

ಮತ್ತು

ಸರ್ವಶ್ರೀ ಎಂ.ಎಸ್. ಅನನ್ತನಾರಾಯಣೈಯ್ಯಂಗಾರ್ಯರು, M.A. M.Ed.
ಎಸ್.ಟಿ. ಶ್ರೀನಿವಾಸನರಸಿಂಹಾಚಾರ್ಯರು, ಭಕ್ತಮಂಡಲಿ, ಕೋಯಿಲ್‌ನಂಬಿ
ಎಸ್. ಕೆ. ರಾಮಸ್ವಾಮಿ ಅಯ್ಯಂಗಾರ್ಯರು, ಪೆರಿಯನಂಬಿ
ಶ್ರೀರಂಗಾಚಾರ್ಯರು, ಆಳ್ವಾರ್‌ತಿರುನಗರಿ,
ಎ. ತಿರುವೇಂಗಡಶಾಸ್ತ್ರಿ M.A. 34, ಶೆಣೈನಗರ್, ಮದ್ರಾಸ್
ಡಾ|| ಆರ್. ಸಂಪತ್, ಮದರಾಸ್-24
ಎಂ.ಬಿ. ಕೃಷ್ಣಯ್ಯಂಗಾರ್, ಬಿ.ಇ. ಬೆಂಗಳೂರು

## ಶ್ರೀಭಾಷ್ಯ ಸದಸ್ ನಿರ್ವಾಹಕಾಧ್ಯಕ್ಷರುಗಳು

ಶ್ರೀ ಉ.ವೇ " ಪಂಡಿತರಾಜ " ವಿದ್ವಾನ್ ಮಂಡಯಂ ಅನಂದಾಣ್ ಪಿಳ್ಳೈ
ಆಳ್ವಾರ್ ತಿರುಮಲ್ಯೆ ಅಯ್ಯಂಗಾರ್ಯರು, ವಿಶ್ರಾಂತ ಸಂಸ್ಕೃತ ಶಾಲಾಧ್ಯಕ್ಷರು
ಮೇಲುಕೋಟೆ

ಶ್ರೀ ಉ.ವೇ. ವಿದ್ವಾನ್ ಶ್ರೀರಂಗಂ ತಿ.ಅ. ನರಸಿಂಹಾಚಾರ್ಯರು.
(ಸಂಸ್ಕೃತ ಮಹಾಪಾಠಶಾಲಾಧ್ಯಕ್ಷರು, ಮೇಲುಕೋಟೆ)

ಶ್ರೀ ಉ.ವೇ. ವಿದ್ಯಾಧುರೀಣ ಭಾ.ವಂ. ರಾಘವಾಚಾರ್ಯರು, ಮೇಲುಕೋಟೆ
,, ವಿದ್ವಾನ್ ಕಡಾಂಬಿ ತಿರುನಾರಾಯಣೈಯ್ಯಂಗಾರ್ಯರು, ಮೇಲುಕೋಟೆ
,, ವಿ.ಟಿ. ತಿರುನಾರಾಯಣೈಯ್ಯಂಗಾರ್ಯರು, ಎಂ.ಎ.
(ವಿಶ್ರಾಂತ ಸಂಸ್ಕೃತ ಪ್ರಾಧ್ಯಾಪಕರು, ಮೈಸೂರು)
,, ವಿದ್ವಾನ್ ಅಕ್ಕಾರಕ್ಕನಿ ತಿ.ಅ. ಸಂಪತ್ಕುಮಾರಾಚಾರ್ಯರು,- ಎಂ.ಎ.
ಕಾಂಚೀ

,, ವಿದ್ವಾನ್ ಪಂಡಿತ ಭೂಷಣ ರಾ.ಅ. ಕೃಷ್ಣಮಾಚಾರ್ಯರು,
ಬೆಂಗಳೂರು

,, ವಿದ್ವಾನ್ ತಿರುನಾಂಗೂರ್ ಪ್ರ.ಭ. ಅಣ್ಣಂಗರಾಚಾರ್ಯರು,
(ಶ್ರೀ ರಾಮಾನುಜ ವೇದಾಂತ ಮಹಾ ವಿದ್ಯಾಲಯ, ಅಯೋಧ್ಯೆ)
,, ವಿದ್ವಾನ್ ಶ್ರೀರಂಗಂ ಪ್ರ.ಭ. ನರಸಿಂಹಾಚಾರ್ಯರು, ದೊಡ್ಡಬಾಲ

## ಸಮ್ಮೇಳನದ ಕಾರ್ಯನಿರ್ವಾಹಕ ಸಮಿತಿ ಸದಸ್ಯರು

ಶ್ರೀ ಉ.ವೇ. ಅಧ್ಯಾಪಕ ರಾ|| ನಾರಾಯಣೈಯ್ಯಂಗಾರ್ಯರು,
ಮೇಲುಕೋಟೆ
,, ಪಾಂಚರಾತ್ರಾಗಮವಿದ್ವಾನ್ ಆಗಮಿಕ ಬೇಲೂರು ಸಂಪತ್ಕುಮಾರ
ಭಟ್ಟಾಚಾರ್ಯರು, ಮೇಲುಕೋಟೆ
,, ಸ್ಥಾನೀಕಂ ಕರಗಂ ಶೇಷಯ್ಯಂಗಾರ್ಯರು, ಮೇಲುಕೋಟೆ
,, ಎಂ.ಎಸ್. ಅಪ್ರಮೇಯ ಅಯ್ಯಂಗಾರ್ಯರು, ಮೇಲುಕೋಟೆ
,, ವಿದ್ವಾನ್ ಮುಡುಂಬೈ ನರಸಿಂಹಾಚಾರ್ಯರು, ಮೇಲುಕೋಟೆ

,, ಎಂ.ಐ. ನರಸಿಂಹೈಯಂಗಾರ್ಯರು, ಮೇಲುಕೋಟೆ

,, ವೇದ ವಿದ್ವಾನ್ ಘನಪಾಠಿ ಎಸ್. ನರಸಿಂಹಾಚಾರ್ಯರು,
ಮೇಲುಕೋಟೆ

,, ವಿದ್ವಾನ್ ಅರೈಯರ್ ಶ್ರೀರಾಮಶರ್ಮ, ಮೇಲುಕೋಟೆ

,, ಅಧ್ಯಾಪಕ ಜಿ.ಕೆ. ಶ್ರೀನಿವಾಸಯ್ಯಂಗಾರ್ಯರು, ಮೇಲುಕೋಟೆ

,, ಕೆ.ಟಿ. ಸುದರ್ಶನ ನರಸಿಂಹಾಚಾರ್ಯರು, ಮೇಲುಕೋಟೆ

,, ಅಧ್ಯಾಪಕ ಜವಳಿ ವೇಂಕಟಾದ್ರಿ ಕೃಷ್ಣಯ್ಯಂಗಾರ್ಯರು,
ಮೇಲುಕೋಟೆ

,, ಖಾದ್ರಿ ವೆಂಕಟ ನರಸಿಂಹಾಚಾರ್ಯರು

## ಶ್ರೀ ರಾಮಾನುಜ ಮಿಷನ್ (ಇಂಡಿಯಾ)

### ಅಧ್ಯಕ್ಷರು

ಶ್ರೀಮಾನ್ ಕೆ. ವೆಂಕಟಸ್ವಾಮಿ ನಾಯುಡು, ಬಿ.ಎ. ಬಿ.ಎಲ್.
(ಮಾಜಿ ಮಂತ್ರಿಗಳು, ಮದರಾಸು)

### ಉಪಾಧ್ಯಕ್ಷರು

ಶ್ರೀ. ಉ.ವೇ. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ಯರು, ಎಂ.ಎ. ಬಿ.ಎಲ್.
(ಸಂಪಾದಕರು, " ಶ್ರೀ ವೈಷ್ಣವ ಸುದರ್ಶನಂ" ಪುತ್ತೂರು ಅಗ್ರಹಾರಂ,
ತಿರುಚ್ಚಿ–7)

ಶ್ರೀ ಉ.ವೇ.ಕೋ.ಕ.ಅ. ವೆಂಕಟಾಚಾರ್ಯರು, ತಿರುವಲ್ಲಿಕ್ಕೇಣಿ, ಮದ್ರಾಸ್

### ಕೋಶಾಧಿಕಾರಿಗಳು

ಶ್ರೀ ಟಿ.ಕೆ. ರಾಮಾನುಜದಾಸ್, ಮದರಾಸ್

ಶ್ರೀ ಪರಮಾರ್ಥ ಭೂಷಣ ನಾಥೆಲ್ಲ ಸಂಪತ್ತು ಅವರು, ಮದರಾಸ್

ಶ್ರೀ ವೆ. ಅ. ಸಂಪತ್ತು ಅವರು ಇತ್ಯಾದಿ ನಿರ್ವಾಹಕ ಸದಸ್ಯರು

# ಶ್ರೀ ರಾಮಾನುಜ ಮಿಷನ್ (ಮೈಸೂರು ಶಾಖೆ)

## ಉಪಾಧ್ಯಕ್ಷರು

ಶ್ರೀ ಎಂ.ಎ. ತಿರುನಾರಾಯಣನ್, ಬಿ.ಇ. ಬೆಂಗಳೂರು
ಶ್ರೀ ಎಂ.ಎ. ಶ್ರೀನಿವಾಸ ಶಠಕೋಪಶರ್ಮ, ಬಿ.ಇ. ಬೆಂಗಳೂರು

## ಕಾರ್ಯದರ್ಶಿಗಳು

ಶ್ರೀ ಆ.ಸ. ಶ್ರೀನಿವಾಸೈಯಂಗಾರ್, ಬಿ.ಎಸ್‌ಸಿ. (ಆನರ್ಸ್) ಬೆಂಗಳೂರು.

## ಕೋಶಾಧಿಕಾರಿಗಳು

ಶ್ರೀ ಕಡಾಂಬಿ ಶ್ರೀನಿವಾಸಯ್ಯಂಗಾರ್ಯರು, ಬೆಂಗಳೂರು

## ನಿರ್ವಾಹಕ ಸದಸ್ಯರು

ಶ್ರೀ ಉ.ವೇ. "ಪಂಡಿತ ಭೂಷಣಂ" ವಿದ್ವಾನ್ ರಾ.ಅ. ಕೃಷ್ಣಮಾಚಾರ್ಯರು
,, ಡಾ|| ವಿ. ರಾಮಯ್ಯಂಗಾರ್, ಬೆಂಗಳೂರು ತಿರುಪ್ಪಾವೈ ಸಮಿತಿ ಅಧ್ಯಕ್ಷರು
,, ಇ.ಎಸ್. ಭೂವರಾರ್ಹ, ಎಂ.ಎ.
,, ಬಿ.ವಿ. ತಿರುಮಲೈ ಅಯ್ಯಂಗಾರ್, ಬೆಂಗಳೂರು
ಶ್ರೀಮಾನ್ ಆರ್.ಎಲ್. ರಾಜು, ಬಿ.ಇ. ಬೆಂಗಳೂರು
ಶ್ರೀಮಾನ್ ಗಾಡಿ ಚೆಲುವರಾಯಶೆಟ್ಟಿಯಾರ್, ಬೆಂಗಳೂರು
ಶ್ರೀಮಾನ್ ಎಂ.ಕೆ. ನರಸಿಂಹ ಶೆಟ್ಟಿಯಾರ್, ಬೆಂಗಳೂರು



ಶ್ರೀಮತೇ ರಾಮಾನುಜಾಯ ನಮಃ

# ಶ್ರೀ ರಾಮಾನುಜ ದರ್ಶನ ಸಮ್ಮೇಳನ

"ಎಂಬೆರುಮಾನಾರ್ ದರ್ಶನ ಮಹಾನಾಡು"

## All India Conference on the Philosophy of Sri Ramanuja

ಮೇ 24, 25, 26 (ಭಾನು, ಸೋಮ, ಮಂಗಳವಾರ). ದಿನಾಂಕಗಳಲ್ಲಿ ಮೇಲುಕೋಟೆಯಲ್ಲಿ ನಡೆಯುತ್ತದೆ.

ಏಧತಾಂ ಯತಿರಾಜಸ್ಯ ಸಾಮ್ರಾಜ್ಯಂ ಸರ್ವತೋಮುಖಂ
ಯತ್ರಸಂಪತ್ಕುಮಾರೋಪಿ ಯುವರಾಜಪದಾಸ್ಪದಂ ||
ವೈದಿಕೈಸ್ಸನ್ನುತಾಯಾಸ್ತು ವೇದಶೈಲನಿವಾಸಿನೇ |
ನಾರಾಯಣ ಪ್ರತಿಷ್ಠಾತ್ರೇ ಯತಿರಾಜಾಯ ಮಂಗಳಂ ||



## ಶ್ರೀ ರಾಮಾನುಜ ಧರ್ಮ ಪ್ರಚಾರ ಸಂಘ

93, ಟಿ.ಪಿ. ಕೋಯಿಲ್ ವೀಧೀ, ತಿರುವೆಲ್ಲಿಕ್ಕೇಣಿ, ಮದ್ರಾಸ್–5

ಮೈಸೂರು ಶಾಖೆ:
"ಶ್ರೀ ಗೋಪಾಮಂದಿರಂ" ಮಲ್ಲೇಶ್ವರಂ, ಬೆಂಗಳೂರು–3.

---

ಶ್ರೀ ವೈದ್ಯನಾಥ ಪ್ರಿಂಟರ್ಸ್, ಮಲ್ಲೇಶ್ವರಂ, ಬೆಂಗಳೂರು–3.